# ಕರ್ನಾಟಕ ವಿಧಾನ ಪರಿಷತ್ತು

| | | | |
|---|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 50 |
| 2 | ವಿಧಾನ ಪರಿಷತ್ತಿನ ಸದಸ್ಯರ ಹೆಸರು | : | ಶ್ರೀ ಎನ್.ರವಿಕುಮಾರ್ (ವಿಧಾನ ಸಭೆಯಿಂದ ಚುನಾಯಿತರಾದವರು |
| 3 | ಉತ್ತರಿಸುವ ದಿನಾಂಕ | : | 16-09-2021 |
| 4 | ಉತ್ತರಿಸುವ ಸಚಿವರು | : | ಗೃಹ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಅಗ್ನಿಶಾಮಕ ಇಲಾಖೆಯಿಂದ ಬಹುಮಹಡಿ ವಸತಿ ಸಂಕೀರ್ಣಗಳಿಗೆ ನಿರಾಕ್ಷೇಪಣಾ ಪತ್ರ ನೀಡಲಾಗುತ್ತದೆಯೇ; ಈ ನಿರಾಕ್ಷೇಪಣಾ ಪತ್ರ ನೀಡದಿರುವ ನಿಯಮಗಳೇನು ; | ಹೌದು, ಅಗ್ನಿಶಾಮಕ ಇಲಾಖೆಯಿಂದ ಬಹುಮಹಡಿ ವಸತಿ ಸಂಕೀರ್ಣಗಳಿಗೆ ನಿರಾಕ್ಷೇಪಣಾ ಪತ್ರ ನೀಡಲಾಗುತ್ತದೆ.<br>ರಾಷ್ಟ್ರೀಯ ಕಟ್ಟಡ ಸಂಹಿತೆ - 2016 (National Building Code- 2016 Part-3 & Part-4) ಮತ್ತು ಸ್ಥಳೀಯ ನಿಯಮಾವಳಿ (Zonal Regulations) ರನ್ವಯ ಬಹುಮಹಡಿ ಕಟ್ಟಡವನ್ನು ನಿರ್ಮಿಸದೇ/ಪಾಲಿಸದೇ ಇದ್ದಲ್ಲಿ, ನಿಯಮಗಳ ಉಲ್ಲಂಘನೆಯಾದಲ್ಲಿ ನಿರಾಕ್ಷೇಪಣಾ ಪತ್ರ ನೀಡಲು ಸಾಧ್ಯವಿರುವುದಿಲ್ಲ. |
| ಆ) | ಬಹುಮಹಡಿ ವಸತಿ ಸಂಕೀರ್ಣಗಳಿಗೆ ನಿರಾಕ್ಷೇಪಣಾ ಪತ್ರ ನೀಡಿದ ಬಳಿಕ ಎಷ್ಟು ವರ್ಷಗಳಿಗೊಮ್ಮೆ ಅಗ್ನಿ ನಿರೋಧಕ ವ್ಯವಸ್ಥೆಯ ಸಮರ್ಪಕ ನಿರ್ವಹಣೆ ಕುರಿತು ಪರಿವೀಕ್ಷಣೆ ಮಾಡಲಾಗುತ್ತದೆ; ಕಳೆದ 3 ವರ್ಷಗಳಲ್ಲಿ ಎಷ್ಟು ಬಹುಮಹಡಿ ವಸತಿ ಸಂಕೀರ್ಣಗಳ ಪರಿಶೀಲನೆ ಮಾಡಲಾಗಿದೆ; ಬೆಂಗಳೂರು ದಕ್ಷಿಣ ಸಿಂಗಸಂದ್ರದಲ್ಲಿರುವ ತಿರುಮಲ ಸರೋವರ, ಬಹುಮಹಡಿಗಳ ವಸತಿ ಸಂಕೀರ್ಣವನ್ನು ಪರಿಶೀಲನೆ ಮಾಡಲಾಗಿದೆಯೇ; ಸದರಿ ವಸತಿ ಸಂಕೀರ್ಣವು ನಿಯಮಗಳಿಗೆ ಅನುಗುಣವಾಗಿದೆಯೇ; | ರಾಷ್ಟ್ರೀಯ ಕಟ್ಟಡ ಸಂಹಿತೆ ಮತ್ತು ಸ್ಥಳೀಯ ನಿಯಮಾವಳಿ ರನ್ವಯ ಬಹುಮಹಡಿ ಕಟ್ಟಡವನ್ನು ನಿರ್ಮಾಣ ಪೂರ್ವದಲ್ಲಿ ನಿರಾಕ್ಷೇಪಣಾ ಪತ್ರ ಪಡೆಯಬೇಕಾಗಿರುತ್ತದೆ. ನಿರಾಕ್ಷೇಪಣಾ ಪತ್ರದಲ್ಲಿ ಸೂಚಿಸಿರುವ ಅಗ್ನಿಶಮನ ಮತ್ತು ಅಗ್ನಿನಿವಾರಣೆ ಉಪಕರಣಗಳನ್ನು ಸಂಪೂರ್ಣವಾಗಿ ಅನುಷ್ಠಾನಗೊಳಿಸಿದ ನಂತರ ಅಗ್ನಿಶಾಮಕ ಇಲಾಖೆಯಿಂದ ಕ್ಲಿಯರೆನ್ಸ್ ಪತ್ರ ಪಡೆಯಬೇಕಾಗುತ್ತದೆ. ಬಹುಮಹಡಿ ಕಟ್ಟಡಗಳಿಗೆ ಕ್ಲಿಯರೆನ್ಸ್ ಪತ್ರ ಪಡೆದ ನಂತರ ಅಧಿಸೂಚನೆ ಸಂಖ್ಯೆ: ಹೆಚ್‌ಡಿ 33 ಎಸ್‌ಎಫ್‌ಬಿ 2011, ದಿನಾಂಕ:07.07.2011 ರನ್ವಯ ಪ್ರತಿ 02 ವರ್ಷಗಳಿಗೊಮ್ಮೆ ಪರಿವೀಕ್ಷಣೆ ಮಾಡಿ ಕ್ಲಿಯರೆನ್ಸ್ ಪತ್ರ ನವೀಕರಿಸಬೇಕಾಗಿರುತ್ತದೆ. ಅದರಂತೆ, ಪ್ರತಿ 02 ವರ್ಷಗಳಿಗೊಮ್ಮೆ ಪರಿವೀಕ್ಷಣೆ ಮಾಡಲಾಗುತ್ತದೆ.<br>ಕಳೆದ 3 ವರ್ಷಗಳಲ್ಲಿ ಸುಮಾರು 279 ಸಂಖ್ಯೆ ಬಹುಮಹಡಿ ವಸತಿ ಸಂಕೀರ್ಣಗಳ ಪರಿಶೀಲನೆ ಮಾಡಲಾಗಿದೆ.<br>ನಿರಾಕ್ಷೇಪಣಾ ಪತ್ರದಲ್ಲಿ ಸೂಚಿಸಿರುವ ಅಗ್ನಿಶಮನ ಮತ್ತು ಅಗ್ನಿನಿವಾರಣೆ ಉಪಕರಣಗಳನ್ನು ಸಂಪೂರ್ಣವಾಗಿ ಅನುಷ್ಠಾನಗೊಳಿಸಿದ ನಂತರ ಅಗ್ನಿಶಾಮಕ ಇಲಾಖೆಯಿಂದ ಕ್ಲಿಯರೆನ್ಸ್ ಪತ್ರ ನೀಡುವ ಸಂದರ್ಭದಲ್ಲಿ ಬೆಂಗಳೂರು ದಕ್ಷಿಣ ಸಿಂಗಸಂದ್ರದಲ್ಲಿರುವ ತಿರುಮಲ ಸರೋವರ, ಬಹುಮಹಡಿಗಳ ವಸತಿ ಸಂಕೀರ್ಣವನ್ನು ಪರಿವೀಕ್ಷಣೆ ಮಾಡಲಾಗಿದೆ ಹಾಗೂ ನಿರಾಕ್ಷೇಪಣಾ ಪತ್ರದಲ್ಲಿ ಸೂಚಿಸಿರುವ ಅಗ್ನಿಶಮನ ಮತ್ತು ಅಗ್ನಿನಿವಾರಣೆ ಉಪಕರಣಗಳನ್ನು ಸಂಪೂರ್ಣವಾಗಿ ಅನುಷ್ಠಾನಗೊಳಿಸಿದ್ದರಿಂದ ಅಗ್ನಿಶಾಮಕ ಇಲಾಖೆಯಿಂದ ದಿನಾಂಕ:27.09.2017 ರಂದು ಕ್ಲಿಯರೆನ್ಸ್ ಪತ್ರ ನೀಡಲಾಗಿರುತ್ತದೆ. |
| ಇ) | ಸದರಿ ವಸತಿ ಸಂಕೀರ್ಣದಲ್ಲಿ ಅಗ್ನಿಶಾಮಕ ವಾಹನ ಓಡಾಡುವ ಸ್ಥಳದಲ್ಲಿ ಶಾಶ್ವತ ಕಾಮಗಾರಿಗಳನ್ನು ನಿರ್ಮಿಸಿರುವ ಬಗ್ಗೆ ಇಲಾಖೆಯ ನಿಲುವೇನು; ಈ ಶಾಶ್ವತ ನಿರ್ಮಾಣಗಳನ್ನು ತೆರವುಗೊಳಿಸಲು ಯಾವ ಕ್ರಮ ಕೈಗೊಳ್ಳಲಾಗಿದೆ; | ಸದರಿ ವಸತಿ ಸಂಕೀರ್ಣದಲ್ಲಿ ಅಗ್ನಿಶಾಮಕ ವಾಹನ ಓಡಾಡುವ ಸ್ಥಳದಲ್ಲಿ ಶಾಶ್ವತ ಕಾಮಗಾರಿಯನ್ನು ನಿರ್ಮಿಸಿರುವ ಬಗ್ಗೆ ಗಮನಕ್ಕೆ ಬಂದಿರುವುದಿಲ್ಲ. ಈ ಸಂಬಂಧ ಅಗ್ನಿಶಾಮಕ ಇಲಾಖೆಯಿಂದ ಪರಿವೀಕ್ಷಣೆ ನಡೆಸಿ ಅಧಿಸೂಚನೆ ಸಂಖ್ಯೆ: ಹೆಚ್‌ಡಿ 33 ಎಸ್‌ಎಫ್‌ಬಿ 2011, ದಿನಾಂಕ:07.07.2011 ರನ್ವಯ ಕ್ರಮಕೈಗೊಳ್ಳಲಾಗುವುದು. |
| ಈ) | ಬಹುಮಹಡಿ ವಸತಿ ಸಂಕೀರ್ಣಗಳಿಗೆ ಅಗ್ನಿಶಾಮಕ ಇಲಾಖೆಯಿಂದ ನಿರಾಕ್ಷೇಪಣಾ ಪತ್ರ ನೀಡಲು ಲಂಚ ಪಡೆಯುತ್ತಿರುವ ಕುರಿತು ಸಾರ್ವಜನಿಕರಿಂದ ಆರೋಪಗಳು ಬಂದಿದೆಯೇ; ಈ ಕುರಿತು ಸರ್ಕಾರದ ನಿಲುವೇನು? | ಈ ಬಗ್ಗೆ ಸಾರ್ವಜನಿಕರಿಂದ ಯಾವುದೇ ಆರೋಪಗಳು ಬಂದಿರುವುದಿಲ್ಲವಾದ್ದರಿಂದ ಸದರಿ ಪ್ರಶ್ನೆಯು ಉದ್ಭವಿಸುವುದಿಲ್ಲ. |

**ಸಂಖ್ಯೆ: ಒಇ 178 ಎಸ್‌ಎಫ್‌ಬಿ 2021**

(ಆರಗ ಜ್ಞಾನೇಂದ್ರ)
ಗೃಹ ಸಚಿವರು